

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 260. |
| ಸದಸ್ಯರ ಹೆಸರು | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 14.12.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪಟ್ಟಾ, ಭೂಮಿ, ಹಳ್ಳ, ತೊರೆ, ಕೆರೆ, ನದಿ, ಪ್ರದೇಶಗಳಲ್ಲಿ ಮರಳು ತೆಗೆಯಲು ಅವಕಾಶ ಕೊಡುವ ಕರ್ನಾಟಕ ನೂತನ ಮರಳು ನೀತಿ-2020 ಜಾರಿಯಲ್ಲಿದೆಯೇ; ಇದ್ದಲ್ಲಿ, ನೂತನ ಮರಳು ನೀತಿ ಜಾರಿಗೆ ತಂದಿರುವ ಉದ್ದೇಶಗಳೇನು; (ವಿವರ ನೀಡುವುದು). | ಜಾರಿಯಲ್ಲಿರುತ್ತದೆ.<br><br>ರಾಜ್ಯದ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಸುಲಭವಾಗಿ ಕಡಿಮೆ ದರದಲ್ಲಿ ಮರಳು ಪೂರೈಕೆ ಮಾಡುವ ಸಂಬಂಧ ಹೊಸ ಮರಳು ನೀತಿ, 2020ನ್ನು ಜಾರಿಗೊಳಿಸಲಾಗಿರುತ್ತದೆ. |
| ಆ) | ಈ ಹೊಸ ಮರಳು ನೀತಿಯಡಿ ಮಂಡ್ಯ ಜಿಲ್ಲೆಯಲ್ಲಿ ಮರಳು ತೆಗೆಯಲು ಗುರುತಿಸಿರುವ ಮರಳು ನಿಕ್ಷೇಪಗಳು ಯಾವುವು; ಈ ನಿಕ್ಷೇಪಗಳಲ್ಲಿ ಲಭ್ಯವಿರುವ ಮರಳಿನ ಪ್ರಮಾಣವೆಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು) | ಮಂಡ್ಯ ಜಿಲ್ಲಾ ವ್ಯಾಪ್ತಿಯ ಕಾವೇರಿ, ಹೇಮಾವತಿ, ಶಿಂಷಾ ನದಿಗಳು ಹಾಗೂ ಹಳ್ಳಗಳು ವರ್ಷವಿಡಿ ನೀರಿನಿಂದ ಆವೃತವಾಗಿದ್ದು, (Perinial) ಇಂತಹ ಪ್ರದೇಶಗಳಲ್ಲಿ ಮರಳು ಗಣಿಗಾರಿಕೆ (Instream Mining) ಯನ್ನು ನಿಷೇಧಿಸಿರುವುದರಿಂದ ಯಾವುದೇ ಮರಳು ನಿಕ್ಷೇಪ ಪ್ರದೇಶಗಳನ್ನು ಗುರುತಿಸಿರುವುದಿಲ್ಲ. |
| ಇ) | ಈ ಮರಳು ನೀತಿಯಿಂದ ರಾಜ್ಯ ಸರ್ಕಾರಕ್ಕೆ ಪ್ರಸಕ್ತ ಸಾಲಿನಲ್ಲಿ ಸಂದಾಯವಾಗಿರುವ ಆದಾಯವೆಷ್ಟು; ಈ ನೀತಿಯಡಿ ಪ್ರತಿ ಮೆಟ್ರಿಕ್ ಟನ್ ಮರಳಿಗೆ ನಿಗದಿಪಡಿಸಿರುವ ದರವೆಷ್ಟು; ದರ ನಿಗದಿಪಡಿಸಲು ಅನುಸರಿಸುವ ಮಾನದಂಡಗಳೇನು; (ವಿವರ ನೀಡುವುದು) | ಪ್ರಸ್ತುತ, ಹೊಸ ಮರಳು ನೀತಿ, 2020 ಜಾರಿಯಲ್ಲಿದ್ದು, ಸದರಿ ಮರಳು ನೀತಿಯಂತೆ ದಿನಾಂಕ 01.12.2021 ರಂದು ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು 2021 ನ್ನು ಜಾರಿಗೊಳಿಸಲಾಗಿರುತ್ತದೆ.<br><br>ಅಧಿಸೂಚನೆ ಹೊರಡಿಸಿರುವ ಮರಳು ನಿಕ್ಷೇಪ ಪ್ರದೇಶ / ಬ್ಲಾಕ್ ಗಳಲ್ಲಿ ಮರಳು ತೆಗೆಯುವ ಕಾರ್ಯ ಪ್ರಾರಂಭವಾಗಬೇಕಾಗಿರುತ್ತದೆ. |

--2